# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1209
2. ಸದಸ್ಯರ ಹೆಸರು : ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 23.12.2021.
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ವಿಶ್ವೇಶ್ವರಯ್ಯ ಜಲ ನಿಗಮವನ್ನು ಯಾವಾಗ ಸ್ಥಾಪನೆ ಮಾಡಲಾಯಿತು; ಇದರ ಧ್ಯೇಯೋದ್ದೇಶಗಳೇನು; ಇದರ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳು ಮತ್ತು ತಾಲ್ಲೂಕುಗಳು ಯಾವುವು; (ವಿವರವಾದ ಮಾಹಿತಿ ನೀಡುವುದು) | ಬರಪೀಡಿತ ಪ್ರದೇಶಗಳ ಕುಡಿಯುವ ನೀರಿನ ಮತ್ತು ನೀರಾವರಿ ಬೇಡಿಕೆಯನ್ನು ನೀಗಿಸುವ ಸಲುವಾಗಿ ವಿಶ್ವೇಶ್ವರಯ್ಯ ಜಲ ನಿಗಮ ನಿಯಮಿತವು ದಿನಾಂಕ:20.10.2016 ರಂದು ಸರ್ಕಾರಿ ಸ್ವಾಮ್ಯದ ಕಂಪನಿಯಾಗಿ ಕಂಪನಿ ಕಾಯ್ದೆ-2013ರಡಿ ನೋಂದಣಿಯಾಗಿದ್ದು, ದಿನಾಂಕ:01.01.2017 ರಿಂದ ಕಾರ್ಯಾರಂಭಗೊಂಡಿರುತ್ತದೆ. ಈ ಸಂಸ್ಥೆಯು ಬರಪೀಡಿತ ಪ್ರದೇಶಗಳ ನೀರಿನ ಬೇಡಿಕೆಯನ್ನು ತಾಂತ್ರಿಕತೆಯೊಂದಿಗೆ, ದಕ್ಷತೆಯಿಂದ ಮತ್ತು ವ್ಯವಸ್ಥಿತವಾಗಿ ಅಲ್ಲದೇ ಪರಿಸರ ಸ್ನೇಹಿಯಾಗಿ ಹಾಗೂ ಆರ್ಥಿಕ ಸ್ವಬಲ ಮೂಲಕ ಪೂರೈಸಲು ಯೋಜಿಸಿರುವ ಸಂಸ್ಥೆಯಾಗಿರುತ್ತದೆ.<br><br>ವಿಶ್ವೇಶ್ವರಯ್ಯ ಜಲ ನಿಗಮದ ವ್ಯಾಪ್ತಿಯಲ್ಲಿ ಬರುವ ಜಿಲ್ಲೆ ಹಾಗೂ ತಾಲ್ಲೂಕುಗಳ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ | ಕಳೆದ 2 ವರ್ಷಗಳಿಂದ ಸದರಿ ನಿಗಮದಿಂದ ಎಸ್.ಸಿ.ಪಿ / ಟಿ.ಎಸ್.ಪಿ ಯೋಜನೆಯ ವೈಯಕ್ತಿಕ ಕಾಮಗಾರಿ ಅನುದಾನದಡಿ ಎಷ್ಟು ಹಣವನ್ನು ಬಿಡುಗಡೆ ಮಾಡಲಾಗಿದೆ; ಖರ್ಚಾಗಿರುವುದು ಎಷ್ಟು; ಬಾಕಿ ಎಷ್ಟು; (ಜಿಲ್ಲಾವಾರು, ತಾಲ್ಲೂಕುವಾರು ಮಾಹಿತಿ ನೀಡುವುದು) | ವಿಶ್ವೇಶ್ವರಯ್ಯ ಜಲ ನಿಗಮ ನಿಯಮಿತದಡಿಯಲ್ಲಿ ವೈಯಕ್ತಿಕ/ಸಾಮೂಹಿಕ ಫಲಾನುಭವಿ ಕೇಂದ್ರಿತ ಕಾಮಗಾರಿಗಳಿಗೆ 2019-20ನೇ ಸಾಲಿನಲ್ಲಿ ಎಸ್.ಸಿ.ಪಿ ಅಡಿಯಲ್ಲಿ ರೂ.128.00 ಕೋಟಿಗಳು ಹಾಗೂ ಟಿ.ಎಸ್.ಪಿ ಅಡಿಯಲ್ಲಿ ರೂ.76.50 ಕೋಟಿಗಳ ಅನುದಾನವನ್ನು ಹಂಚಿಕೆ ಮಾಡಲಾಗಿರುತ್ತದೆ.<br>2020-21ನೇ ಸಾಲಿನಲ್ಲಿ ಎಸ್.ಸಿ.ಪಿ ಮತ್ತು ಟಿ.ಎಸ್.ಪಿ ಯೋಜನೆ ಅಡಿಯಲ್ಲಿ ಹಂಚಿಕೆ ಮಾಡಿರುವ ಅನುದಾನವನ್ನು ಎಸ್.ಸಿ.ಪಿ ಮತ್ತು ಟಿ.ಎಸ್.ಪಿ ಅಡಿಯ ಅಧಿನಿಯಮ ಕಲಂ 7(ಡಿ)ರ ಅಡಿಯಲ್ಲಿ Deemed Expenditure ಎಂದು ಪರಿಗಣಿಸಲು ಆರ್ಥಿಕ ಇಲಾಖೆಯು ಸೂಚಿಸಿರುವುದರಿಂದ ವಿಶ್ವೇಶ್ವರಯ್ಯ ಜಲ ನಿಗಮವು ಸದರಿ ಸಾಲಿನಲ್ಲಿ ಈ ಯೋಜನೆಗಳಡಿಯಲ್ಲಿ ವಿಧಾನಸಭಾ ಕ್ಷೇತ್ರವಾರು ಅನುದಾನವನ್ನು ಹಂಚಿಕೆ ಮಾಡಿರುವುದಿಲ್ಲ.<br>2019-20ನೇ ಸಾಲಿನಲ್ಲಿ ಎಸ್.ಸಿ.ಪಿ/ಟಿ.ಎಸ್.ಪಿ ಯೋಜನೆಯ ವೈಯಕ್ತಿಕ / ಸಾಮೂಹಿಕ ಕಾಮಗಾರಿ ಅನುದಾನದಡಿ ಬಿಡುಗಡೆ ಮಾಡಲಾಗಿರುವ ಅನುದಾನ, ಖರ್ಚಾಗಿರುವ ಅನುದಾನದ ಜಿಲ್ಲಾವಾರು, ತಾಲ್ಲೂಕುವಾರು ವಿವರಗಳನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ. |
| ಇ | ಕಳೆದ 2 ವರ್ಷಗಳಲ್ಲಿ ವಿಧಾನ ಪರಿಷತ್ ಸದಸ್ಯರುಗಳಿಗೆ ಈ ಯೋಜನೆಯಡಿ ಎಷ್ಟು ಹಣವನ್ನು ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ; (ವಿವರವಾದ ಮಾಹಿತಿ ನೀಡುವುದು) | ವಿಶ್ವೇಶ್ವರಯ್ಯ ಜಲ ನಿಗಮದ ಅಡಿಯಲ್ಲಿ 2019-20ನೇ ಸಾಲಿನಲ್ಲಿ ಎಸ್.ಸಿ.ಪಿ-ಟಿ.ಎಸ್.ಪಿ ಯೋಜನೆಯಡಿ ಮಾನ್ಯ ವಿಧಾನ ಪರಿಷತ್ ಸದಸ್ಯರುಗಳಿಗೆ ಬಿಡುಗಡೆ ಮಾಡಿರುವ ಅನುದಾನದ ವಿವರಗಳನ್ನು **ಅನುಬಂಧ-3** ರಲ್ಲಿ ನೀಡಲಾಗಿದ್ದು, 2020-21ನೇ ಸಾಲಿನಲ್ಲಿ ವಿಧಾನಸಭಾ ಕ್ಷೇತ್ರವಾರು ಅನುದಾನವನ್ನು ಹಂಚಿಕೆ ಮಾಡಿರುವುದಿಲ್ಲ. |
| ಈ | ವಿಧಾನ ಪರಿಷತ್ ಸದಸ್ಯರುಗಳಿಗೆ ಅನುದಾನ ನೀಡದಿರುವುದು ನಿಜವೇ; ಇದಕ್ಕೆ ಕಾರಣಗಳೇನು; | |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಉ | ದಿನಾಂಕ:06.10.2020 ರ ಸುತ್ತೋಲೆಯಲ್ಲಿ ಈ ಕಾಮಗಾರಿಗಳನ್ನು KREDL ಮತ್ತು ನಿರ್ಮಿತಿ ಕೇಂದ್ರದಿಂದ ಅನುಷ್ಠಾನಗೊಳಿಸಲು ವಹಿಸಿರುವುದನ್ನು ನಿರ್ಬಂಧಿಸಿರಲು ಕಾರಣಗಳೇನು; ಈ ನಿರ್ಬಂಧವನ್ನು ಯಾವಾಗ ತೆರವುಗೊಳಿಲಾಗುವುದು? | ನಿಗಮವು ಪ್ರಾರಂಭವಾದಾಗಿನಿಂದ ಎಸ್.ಸಿ.ಪಿ/ಟಿ.ಎಸ್.ಪಿ ಕಾಮಗಾರಿಗಳನ್ನು ಮಾತ್ರ ನಿರ್ಮಿತಿ ಕೇಂದ್ರ ಮತ್ತು ಕರ್ನಾಟಕ ಗ್ರಾಮೀಣ ಮೂಲ ಸೌಕರ್ಯ ಅಭಿವೃದ್ಧಿ ನಿಗಮಗಳಿಗೆ ಅನುಷ್ಠಾನಕ್ಕಾಗಿ ವಹಿಸಲಾಗಿರುತ್ತದೆ. ಆದರೆ, ದಿನಾಂಕ:05.10.2020 ರಂದು ಜರುಗಿದ 15ನೇ ನಿರ್ದೇಶಕರ ಮಂಡಳಿ ಸಭೆಯಲ್ಲಿ ಪ್ರಸ್ತುತ ನಿಗಮದಲ್ಲಿಯೇ ಪೂರ್ಣ ಪ್ರಮಾಣದ ಅಧಿಕಾರಿ ವರ್ಗದವರು ಕಾರ್ಯ ನಿರ್ವಹಿಸುತ್ತಿರುವುದರಿಂದ, ಎಸ್.ಸಿ.ಪಿ/ಟಿ.ಎಸ್.ಪಿ ಕಾಮಗಾರಿಗಳನ್ನೂ ಸಹ ನಿಗಮದಿಂದಲೇ ನಿರ್ವಹಿಸಲು ನಿರ್ಧರಿಸಿರುತ್ತದೆ. ಅದರಂತೆ ಸದರಿ ಕಾಮಗಾರಿಗಳನ್ನೂ ಸಹ ನಿಗಮದಿಂದಲೇ ಕೈಗೆತ್ತಿಕೊಳ್ಳಲಾಗುತ್ತಿದೆ.<br><br>ಎಸ್.ಸಿ.ಪಿ/ಟಿ.ಎಸ್.ಪಿ ಕಾಮಗಾರಿಗಳನ್ನು ನಿರ್ಮಿತಿ ಕೇಂದ್ರ ಮತ್ತು ಕರ್ನಾಟಕ ಗ್ರಾಮೀಣ ಮೂಲ ಸೌಕರ್ಯ ಅಭಿವೃದ್ಧಿ ನಿಗಮಗಳಿಂದ ಕೈಗೊಳ್ಳದಿರಲು ಪ್ರಮುಖ ಕಾರಣಗಳನ್ನು **ಅನುಬಂಧ-4** ರಲ್ಲಿ ನೀಡಲಾಗಿದೆ. |

**ಸಂಖ್ಯೆ: ಜಸಂಇ 130 ಡಬ್ಲ್ಯೂಎಲ್ಎ 2021**

**(ಗೋವಿಂದ ಎಂ. ಕಾರಜೋಳ)**
**ಜಲಸಂಪನ್ಮೂಲ ಸಚಿವರು**

## ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1209 ಕ್ಕೆ ಅನುಬಂಧ-1

| ಕ್ರ ಸಂ | ಯೋಜನೆ | ಜಿಲ್ಲೆಗಳು | ತಾಲ್ಲೂಕುಗಳು |
|---|---|---|---|
| 1 | ಭದ್ರಾ ಮೇಲ್ದಂಡೆ ಯೋಜನೆ | ಚಿಕ್ಕಮಗಳೂರು, ಚಿತ್ರದುರ್ಗ, ತುಮಕೂರು, ದಾವಣಗೆರೆ | ತರೀಕೆರೆ, ಕಡೂರು, ಹೊಳಲ್ಕೆರೆ, ಚಳ್ಳಕೆರೆ, ಹಿರಿಯೂರು, ಚಿತ್ರದುರ್ಗ, ಹೊಸದುರ್ಗ, ಮೊಳಕಾಲ್ಮೂರು, ಚಿಕ್ಕನಾಯಕನಹಳ್ಳಿ, ಶಿರ, ಪಾವಗಡ, ಜಗಳೂರು. |
| 2 | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆ | ಚಿಕ್ಕಮಗಳೂರು ಹಾಸನ, ತುಮಕೂರು ಕೋಲಾರ ಚಿಕ್ಕಬಳ್ಳಾಪುರ, ಬೆಂಗಳೂರು ಗ್ರಾಮಾಂತರ, ರಾಮನಗರ | ಕಡೂರು, ಬೇಲೂರು, ಅರಸೀಕೆರೆ, ಸಕಲೇಶಪುರ, ಆಲೂರು, ತುಮಕೂರು, ಚಿಕ್ಕನಾಯಕನಹಳ್ಳಿ, ಶಿರಾ, ಪಾವಗಡ, ಮಧುಗಿರಿ, ಕೊರಟಗೆರೆ, ಗುಬ್ಬಿ, ತಿಪಟೂರು, ಕೋಲಾರ, ಶ್ರೀನಿವಾಸಪುರ, ಮಾಲೂರು, ಬಂಗಾರಪೇಟೆ ಮುಳಬಾಗಿಲು, ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ, ಗೌರಿಬಿದನೂರು, ಗುಡಿಬಂಡೆ ಬಾಗೇಪಲ್ಲಿ, ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ, ರಾಮನಗರ, ಚನ್ನಪಟ್ಟಣ, ಮಾಗಡಿ, ಕನಕಪುರ. |
| 3 | ವಾಣಿ ವಿಲಾಸ ಸಾಗರ ಜಲಾಶಯ | ಚಿತ್ರದುರ್ಗ | ಹೊಳಲ್ಕೆರೆ, ಚಳ್ಳಕೆರೆ, ಹಿರಿಯೂರು, ಚಿತ್ರದುರ್ಗ. |
| 4 | ಗಾಯತ್ರಿ ಜಲಾಶಯ | ಚಿತ್ರದುರ್ಗ, ತುಮಕೂರು | ಹಿರಿಯೂರು, ಶಿರಾ. |
| 5 | ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ, ಚಿಕ್ಕಮಗಳೂರು ಮತ್ತು ಕಡೂರು ತಾಲ್ಲೂಕು ಹಾಗೂ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಒಟ್ಟು 197 ಕೆರೆಗಳ ತುಂಬಿಸುವ ಯೋಜನೆ | ಹಾಸನ, ಚಿಕ್ಕಮಗಳೂರು | ಅರಸೀಕೆರೆ, ಚಿಕ್ಕಮಗಳೂರು, ತರೀಕೆರೆ, ಕಡೂರು. |

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1209 ಕ್ಕೆ ಅನುಬಂಧ-2

ರೂ ಲಕ್ಷಗಳಲ್ಲಿ

| ಕ್ರ ಸಂ | ಜಿಲ್ಲೆ | ತಾಲ್ಲೂಕು | 2019-20 | | | | | |
|---|---|---|---|---|---|---|---|---|
| | | | ಅನುದಾನ | | ಬಿಡುಗಡೆ ಮೊತ್ತ | | ಖರ್ಚಾದ ಮೊತ್ತ | |
| | | | ಎಸ್‌ಸಿಪಿ | ಟಿಎಸ್‌ಪಿ | ಎಸ್‌ಸಿಪಿ | ಟಿಎಸ್‌ಪಿ | ಎಸ್‌ಸಿಪಿ | ಟಿಎಸ್‌ಪಿ |
| ಎತ್ತಿನಹೊಳೆ ಯೋಜನಾ ವಲಯ, ತುಮಕೂರು | | | | | | | | |
| 1 | ಹಾಸನ | ಸಕಲೇಶಪುರ, ಆಲೂರು | 289.73 | 115.00 | 289.73 | 115.00 | 0.00 | 0.00 |
| 2 | ಹಾಸನ | ಆಲೂರು | 300.00 | – | 300.00 | – | 0.00 | 0.00 |
| 3 | ಹಾಸನ | ಬೇಲೂರು | 100.00 | 200.00 | 100.00 | 200.00 | 100.00 | 160.00 |
| 4 | ಹಾಸನ | ಅರಸೀಕೆರೆ | 685.00 | 315.00 | 685.00 | 315.00 | 598.00 | 282.00 |
| 5 | ತುಮಕೂರು | ಗುಬ್ಬಿ, ತುಮಕೂರು | 355.00 | 145.00 | 355.00 | 145.00 | 250.00 | 64.00 |
| 6 | ತುಮಕೂರು | ಶಿರಾ | – | – | – | – | 0.00 | 0.00 |
| 7 | ತುಮಕೂರು | ತಿಪಟೂರು | 552.00 | 260.00 | 552.00 | 260.00 | 322.81 | 180.66 |
| 8 | ತುಮಕೂರು | ಮಧುಗಿರಿ | 125.00 | 75.00 | 125.00 | 75.00 | 0.00 | 0.00 |
| 9 | ತುಮಕೂರು | ಕೊರಟಗೆರೆ | 125.00 | 100.00 | 125.00 | 100.00 | 0.00 | 20.00 |
| 10 | ಬೆಂಗಳೂರು ಗ್ರಾಮಾಂತರ | ದೊಡ್ಡಬಳ್ಳಾಪುರ | 125.00 | 75.00 | 125.00 | 75.00 | 125.00 | 75.00 |
| 11 | ಬೆಂಗಳೂರು ಗ್ರಾಮಾಂತರ | ನೆಲಮಂಗಲ | 1120.00 | 380.00 | 1120.00 | 380.00 | 856.00 | 304.00 |
| 12 | ಬೆಂಗಳೂರು ಗ್ರಾಮಾಂತರ | ಮಾಗಡಿ | 290.00 | 35.00 | 290.00 | 35.00 | 100.00 | 0.00 |
| 13 | ಬೆಂಗಳೂರು ಗ್ರಾಮಾಂತರ | ಯಲಹಂಕ | 650.00 | 350.00 | 650.00 | 350.00 | 650.00 | 350.00 |
| 14 | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | 125.00 | 75.00 | 125.00 | 75.00 | 0.00 | 0.00 |
| 15 | ಚಿಕ್ಕಬಳ್ಳಾಪುರ | ಗೌರಿಬಿದನೂರು | 125.00 | 75.00 | 125.00 | 75.00 | 125.00 | 75.00 |
| 16 | ಚಿಕ್ಕಬಳ್ಳಾಪುರ | ಶಿಡ್ಲಘಟ್ಟ | 200.00 | 200.00 | 200.00 | 200.00 | 125.00 | 75.00 |
| 17 | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | 275.00 | 275.00 | 275.00 | 275.00 | 200.00 | 80.00 |
| 18 | ಚಿಕ್ಕಬಳ್ಳಾಪುರ | ಚಿಂತಾಮಣಿ | 475.00 | 125.00 | 475.00 | 125.00 | 375.00 | 125.00 |
| 19 | ಬೆಂಗಳೂರು ಗ್ರಾಮಾಂತರ | ಹೊಸಕೋಟೆ | 375.00 | 225.00 | 375.00 | 225.00 | 200.00 | 100.00 |
| 20 | ಕೋಲಾರ | ಕೋಲಾರ | 175.00 | 75.00 | 175.00 | 75.00 | 175.00 | 75.00 |
| 21 | ಕೋಲಾರ | ಕೆ.ಜಿ.ಎಫ್ | 125.00 | 75.00 | 125.00 | 75.00 | 0.00 | 0.00 |
| 22 | ಕೋಲಾರ | ಬಂಗಾರಪೇಟೆ | 175.00 | 125.00 | 175.00 | 125.00 | 0.00 | 0.00 |
| 23 | ಕೋಲಾರ | ಮುಳಬಾಗಿಲು | 925.00 | 475.00 | 925.00 | 475.00 | 580.00 | 220.00 |
| 24 | ಕೋಲಾರ | ಶ್ರೀನಿವಾಸಪುರ | 125.00 | 75.00 | 125.00 | 75.00 | 0.00 | 0.00 |
| 25 | ಕೋಲಾರ | ಮಾಲೂರು | 175.00 | 175.00 | 175.00 | 175.00 | 150.00 | 70.00 |
| 26 | ಬೆಂಗಳೂರು ಗ್ರಾಮಾಂತರ | ದೇವನಹಳ್ಳಿ | 250.00 | 150.00 | 250.00 | 150.00 | 250.00 | 150.00 |
| 27 | ತುಮಕೂರು | ಚಿಕ್ಕನಾಯಕನಹಳ್ಳಿ, ಶಿರಾ | 125.00 | 75.00 | 125.00 | 75.00 | 60.07 | 39.41 |
| 28 | ಹಾಸನ | ಹಾಸನ, ಆಲೂರು | 250.00 | 250.00 | 250.00 | 250.00 | 261.78 | 264.77 |
| 29 | ತುಮಕೂರು | ತುಮಕೂರು, ಗುಬ್ಬಿ | 150.00 | 200.00 | 150.00 | 200.00 | 140.00 | 0.00 |
| 30 | ತುಮಕೂರು | ಗುಬ್ಬಿ | – | 75.00 | – | 75.00 | 0.00 | 0.00 |
| | | ವಲಯ ಒಟ್ಟು | 8766.73 | 4775.00 | 8766.73 | 4775.00 | 5643.66 | 2709.84 |
| ಭದ್ರಾ ಮೇಲ್ದಂಡೆ ಯೋಜನಾ ವಲಯ, ಚಿತ್ರದುರ್ಗ | | | | | | | | |
| 1 | ಚಿಕ್ಕಮಗಳೂರು | ಕಡೂರು | 425.00 | 268.50 | 425.00 | 268.50 | 426.11 | 258.74 |
| 2 | ಚಿಕ್ಕಮಗಳೂರು | ಶೃಂಗೇರಿ | 124.80 | 75.00 | 124.80 | 75.00 | 101.31 | 61.83 |
| 3 | ಚಿಕ್ಕಮಗಳೂರು | ತರೀಕೆರೆ | 125.00 | 374.50 | 125.00 | 374.50 | 0.00 | 0.00 |
| 4 | ಚಿಕ್ಕಮಗಳೂರು | ಚಿಕ್ಕಮಗಳೂರು | 125.00 | 75.00 | 125.00 | 75.00 | 0.00 | 0.00 |
| 5 | ಚಿತ್ರದುರ್ಗ | ಹೊಸದುರ್ಗ | 625.00 | 75.00 | 625.00 | 75.00 | 423.00 | 75.00 |
| 6 | ಚಿತ್ರದುರ್ಗ | ಹೊಳಲ್ಕೆರೆ | 425.00 | 255.00 | 425.00 | 255.00 | 425.00 | 0.00 |
| 7 | ಚಿತ್ರದುರ್ಗ | ಚಿತ್ರದುರ್ಗ | 325.00 | 375.00 | 325.00 | 375.00 | 0.00 | 175.00 |
| 8 | ಚಿತ್ರದುರ್ಗ | ಚಳ್ಳಕೆರೆ | 475.00 | 225.00 | 475.00 | 225.00 | 179.41 | 180.00 |
| 9 | ಚಿತ್ರದುರ್ಗ | ಮೊಳಕಾಲ್ಮೂರು | 215.00 | 275.00 | 215.00 | 275.00 | 194.00 | 200.00 |
| 10 | ತುಮಕೂರು | ಪಾವಗಡ | 125.00 | 75.00 | 125.00 | 75.00 | 0.00 | 0.00 |
| 11 | ದಾವಣಗೆರೆ | ಜಗಳೂರು | 325.00 | 275.00 | 325.00 | 275.00 | 300.00 | 260.00 |
| 12 | ಚಿತ್ರದುರ್ಗ | ಹಿರಿಯೂರು | 325.00 | 175.00 | 325.00 | 175.00 | 105.37 | 38.13 |
| 13 | ತುಮಕೂರು | ಶಿರಾ | 125.00 | 150.00 | 125.00 | 150.00 | 100.00 | 75.00 |
| 14 | ಉಡುಪಿ/ಚಿಕ್ಕಮಗಳೂರು | ಉಡುಪಿ-ಚಿಕ್ಕಮಗಳೂರು | 308.14 | 139.27 | 308.14 | 139.27 | 148.94 | 139.27 |
| 15 | ತುಮಕೂರು | ಗುಬ್ಬಿ | – | 60.00 | – | 60.00 | – | 0.00 |
| 16 | ತುಮಕೂರು | ತುಮಕೂರು ಗ್ರಾಮೀಣ | – | 15.00 | – | 15.00 | – | 0.00 |
| | | ವಲಯ ಒಟ್ಟು | 4072.94 | 2887.27 | 4072.94 | 2887.27 | 2403.14 | 1462.97 |
| | | ನಿಗಮ ಒಟ್ಟು | 12839.67 | 7662.27 | 12839.67 | 7662.27 | 8046.80 | 4172.81 |

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1209 ಕ್ಕೆ ಅನುಬಂಧ-3

(ರೂ. ಕೋಟಿಗಳಲ್ಲಿ)

| ಕ್ರ. ಸಂ | ವರ್ಷ | ಕ್ಷೇತ್ರ | ಹೆಸರು | ಮಂಜೂರಾದ ಮೊತ್ತ | | ಬಿಡುಗಡೆಯಾದ ಮೊತ್ತ (ಅಕ್ಟೋಬರ್ 2021 ರವರೆಗೆ) | |
|---|---|---|---|---|---|---|---|
| | | | | ಎಸ್.ಸಿ.ಪಿ | ಟಿ.ಎಸ್.ಪಿ | ಎಸ್.ಸಿ.ಪಿ | ಟಿ.ಎಸ್.ಪಿ |
| ಎತ್ತಿನಹೊಳೆ ಯೋಜನಾ ವಲಯ, ತುಮಕೂರು | | | | | | | |
| 1 | 2019–20 | ಬಾಗೇಪಲ್ಲಿ | ಶ್ರೀ ವೈ.ಎ.ನಾರಾಯಣಸ್ವಾಮಿ | 1.50 | – | 1.50 | – |
| 2 | | ಗುಬ್ಬಿ | ಶ್ರೀ ಕೆ.ಎ.ತಿಪ್ಪೇಸ್ವಾಮಿ | 0.75 | – | 0.75 | – |
| 3 | | ಆಲೂರು | ಶ್ರೀ ಎಂ.ಎ ಗೋಪಾಲಸ್ವಾಮಿ | 2.00 | – | – | – |
| 4 | | ನೆಲಮಂಗಲ | ಶ್ರೀ ಅ.ದೇವೇಗೌಡ | 2.00 | – | – | – |
| 5 | | ದೇವನಹಳ್ಳಿ | ಶ್ರೀ ಪುಟ್ಟಣ್ಣ | 1.25 | 0.75 | 1.25 | 0.75 |
| 6 | | ಚಿಂತಾಮಣಿ | ಶ್ರೀ ಬಸವರಾಜ ಹೊರಟ್ಟಿ | 1.00 | – | – | – |
| 7 | | ಮುಳಬಾಗಿಲು | ಶ್ರೀ ಸಿ.ಆರ್.ಮನೋಹರ್ | 1.00 | 1.00 | – | 1.00 |
| | | | ವಲಯ ಒಟ್ಟು | 9.50 | 1.75 | 3.50 | 1.75 |
| ಭದ್ರಾ ಮೇಲ್ದಂಡೆ ಯೋಜನಾ ವಲಯ, ಚಿತ್ರದುರ್ಗ | | | | | | | |
| 1 | 2019–20 | ಮೊಳಕಾಲ್ಮೂರು | ಶ್ರೀಮತಿ ಜಯಮ್ಮ ಬಾಲರಾಜ್ | 0.9 | 0.75 | 0 | 0 |
| 2 | | ಶಿರಾ | ಶ್ರೀ ಬಿ,ಎಂ,ಎಲ್ ಕಾಂತರಾಜು | 0.0 | 1.00 | 0 | 0 |
| | | | ವಲಯ ಒಟ್ಟು | 0.9 | 1.75 | 0.0 | 0.0 |
| | | | ನಿಗಮ ಒಟ್ಟು | 10.4 | 3.5 | 3.5 | 1.8 |

## ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:1209 ಕ್ಕೆ ಅನುಬಂಧ-4

1. ಮೆ| ಕೆ.ಆರ್.ಐ.ಡಿ.ಎಲ್ ಸಂಸ್ಥೆಯು 3% ಸೇವಾ ಶುಲ್ಕವನ್ನು ವಿಧಿಸುತ್ತದೆ. ಈ ಮೊತ್ತವು ಈ ಅನುದಾನದಿಂದಲೇ ಭರಿಸಬೇಕಿದೆ.
2. ಮೆ| ಕೆ.ಆರ್.ಐ.ಡಿ.ಎಲ್ ಸಂಸ್ಥೆಗೆ ನಿಗದಿಪಡಿಸುವ ಅನುದಾನಕ್ಕೆ ತಕ್ಕಂತೆ ಭೌತಿಕ ಸಾಧನೆಯನ್ನು ನೀಡಲಾಗುತ್ತಿದೆ. ಉದಾಹರಣೆಗೆ, ಒಂದು 10 ಕಿ.ಮಿ. ರಸ್ತೆಯನ್ನು ನಿರ್ಮಿಸಲು ರೂ.10.00 ಲಕ್ಷ ಅನುದಾನವನ್ನು ನಿಗದಿಪಡಿಸಿದರೆ ಸದರಿ ಸಂಸ್ಥೆಯು ತನ್ನ ಸೇವಾ ಶುಲ್ಕ ಮತ್ತು ವರ್ಕರ್ಸ್ ವೆಲ್‌ಫೇರ್ ಸೆಸ್ ಅನ್ನು ಕಡಿತಗೊಳಿಸಿ ಉಳಿದ ರೂ. 9.40 ಲಕ್ಷ ಮೊತ್ತಕ್ಕೆ ಕಾಮಗಾರಿಯನ್ನು ಸೀಮಿತಗೊಳ್ಳುತ್ತಿದ್ದು, ಪೂರ್ಣ ಮಟ್ಟಕ್ಕೆ ಕಾಮಗಾರಿ ನಿರ್ವಹಿಸಿದಂತಾಗುತ್ತಿಲ್ಲ.
3. ಲಾಭ ಮತ್ತು ನಷ್ಟ ತ:ಖ್ತೆಯಲ್ಲಿ ಸೂಚಿಸಿರುವಂತೆ ಎಸ್.ಸಿ.ಪಿ/ಟಿ.ಎಸ್.ಪಿ ಕಾಮಗಾರಿಗಳ ಮೇಲಿನ ವೆಚ್ಚಗಳನ್ನು ಮೆ॥ ಕೆ.ಆರ್.ಐ.ಡಿ.ಎಲ್ ರವರು ನೀಡಿರುವಂತಹ ಹಣಬಳಕೆ ಪ್ರಮಾಣಪತ್ರಗಳ ಆಧಾರದ ಮೇರೆಗೆ ಆಗಿರುತ್ತದೆ ಹಾಗೂ ಕಂಪನಿಯು ಈ ನಿಟ್ಟಿನಲ್ಲಿ ಸ್ವತಂತ್ರವಾಗಿ ಮೌಲ್ಯಮಾಪನ ಮಾಡಿರುವುದಿಲ್ಲ. ತತ್ಪರಿಣಾಮವಾಗಿ, ಅಂತಹ ವೆಚ್ಚಗಳ ಪರಿಪೂರ್ಣತೆಯ ಬಗ್ಗೆ ಟೀಕೆ ಟಿಪ್ಪಣಿ ಮಾಡಲು ಸಾಧ್ಯವಾಗಲಿಲ್ಲ ಎಂದು ನಿಗಮದ ಶಾಸನಬದ್ಧ ಲೆಕ್ಕ ಪರಿಶೋಧಕರು ಆಕ್ಷೇಪಿಸಿರುತ್ತಾರೆ.
4. ಮಹಾಲೇಖಪಾಲಕರ ಆಕ್ಷೇಪಣೆಯಲ್ಲಿ ನಿಗಮ ನಿರ್ವಹಿಸಿದ ಎಸ್.ಸಿ.ಪಿ/ ಟಿ.ಎಸ್.ಪಿ ಕಾಮಗಾರಿಗಳ ಟೆಂಡರ್ ಮೂಲಕ ವಹಿಸುವುದರಿಂದ ಸ್ಪರ್ಧಾತ್ಮಕ ದರಗಳಿಂದ ಉಂಟಾಗುವ ಲಾಭವನ್ನು ಕಳೆದುಕೊಳ್ಳುತ್ತಿರುವುದು ನ್ಯಾಯಸಮ್ಮತವಾಗಿರುವುದಿಲ್ಲವೆಂದು ಆಕ್ಷೇಪಿಸಿರುತ್ತಾರೆ.
5. ನಿಗಮವು 2018-19ನೇ ಸಾಲಿನವರೆಗೂ ಮೆ. ಕೆ.ಆರ್.ಐ.ಡಿ.ಎಲ್ ಸಂಸ್ಥೆಗೆ ಸದರಿ ಕಾಮಗಾರಿಗಳನ್ನು ವಹಿಸುವಾಗ ಶೇಖಡ 100% ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ ಹಾಗೂ 2019-20 ನೇ ಸಾಲಿನಿಂದ ಶೇಖಡ 80% ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದೆ. ಸದರಿ ಅನುದಾನವನ್ನು ಮೆ॥ ಕೆ.ಆರ್.ಐ.ಡಿ.ಎಲ್ ಸಂಸ್ಥೆಯವರು ಸರಾಸರಿಯಾಗಿ ಒಂದು ವರ್ಷದವರೆಗೆ ಬಳಸುವುದಿಲ್ಲ. ಸದರಿ ಅನುದಾನವು ನಿಗಮದಲ್ಲೇ ಲಭ್ಯವಿದ್ದಲ್ಲಿ ಅದರ ಮೇಲೆ ಬಡ್ಡಿ ಆಕರಣೆಯಾಗುತ್ತಿತ್ತು. ಅಲ್ಲದೆ, ಕಾಮಗಾರಿಗಳನ್ನು ನಿರ್ವಹಿಸುವಲ್ಲಿ ವಿಳಂಬವಾಗುತ್ತಿದೆ.
6. ಎಸ್.ಸಿ.ಪಿ/ ಟಿ.ಎಸ್.ಪಿ ಕಾಮಗಾರಿಗಳ ಅನುಷ್ಠಾನದಲ್ಲಿ ಸಮಾಜ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರ, ಹೊರಡಿಸಿರುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕಾಗಿರುತ್ತದೆ ಅದಲ್ಲದೇ ಅನುಷ್ಠಾನದಲ್ಲಿ KTPP ಕಾಯ್ದೆ ಮತ್ತು ಮೇಲೆ ತಿಳಿಸಿರುವ ಸರ್ಕಾರದ ಸಮಾಜ ಕಲ್ಯಾಣ ಇಲಾಖೆಯ, ಕರ್ನಾಟಕ ಸರ್ಕಾರದ ಮಾರ್ಗಸೂಚಿಗಳನ್ನು ಕೂಡಾ ಪಾಲಿಸಬೇಕಾಗುತ್ತದೆ. ಆದರೆ ಹಲವಾರು ಕಾರಣಗಳಿಂದಾಗಿ ಎಸ್.ಸಿ.ಪಿ/ಟಿ.ಎಸ್.ಪಿ ಕಾಮಗಾರಿಗಳನ್ನು ನಿರ್ವಹಿಸುವಲ್ಲಿ ಮಾರ್ಗಸೂಚಿಗಳನ್ನು ಪಾಲಿಸಲು ಕಷ್ಟಕರವಾಗುತ್ತಿದ್ದು, ಕಾಮಗಾರಿಗಳ ಅನುಷ್ಠಾನದಲ್ಲಿ ವಿಳಂಬ ಉಂಟಾಗುತ್ತಿದೆ.
7. ಮೆ॥ ಕೆ.ಆರ್.ಐ.ಡಿ.ಎಲ್ ಸಂಸ್ಥೆಗೆ ವಹಿಸುವ ಕಾಮಗಾರಿಗಳಿಗೆ ಸದರಿ ಸಂಸ್ಥೆಯಿಂದ ಅಂದಾಜನ್ನು ತಯಾರಿಸಿ ನಿಗಮದ ಸಂಬಧಪಟ್ಟ ಮುಖ್ಯ ಇಂಜಿನಿಯರ್‌ರವರಿಂದ ತಾಂತ್ರಿಕ ಮಂಜೂರಾತಿಯನ್ನು ಪಡೆಯಬೇಕಾಗಿದ್ದು, ಎರಡು ಇಲಾಖೆಗಳ ಮಧ್ಯೆ ಸಮನ್ವಯ ಸಾಧಿಸುವಲ್ಲಿ ವಿಳಂಬವಾಗುತ್ತಿದ್ದು, ಇದರಿಂದ ಕಾಮಗಾರಿ ಅನುಷ್ಠಾನದಲ್ಲಿ ವಿಳಂಬವಾಗುತ್ತಿದೆ.
8. ಎಸ್.ಸಿ.ಪಿ/ ಟಿ.ಎಸ್.ಪಿ ಅಧಿನಿಯಮ 2013 ರ ಅನ್ವಯ ರಚನೆಯಾಗಿರುವ ಪರಿಷತ್ ಮಾರ್ಗಸೂಚಿ ಹಾಗೂ ನಿಯಮಗಳು 2017 ರ ಅಧ್ಯಾಯ (3) ರ ಕಂಡಿಕೆ (13) ರಲ್ಲಿ ಒಂದು ನಿರ್ದಿಷ್ಟ ಹಣಕಾಸು ವರ್ಷಕ್ಕೆ ಹಂಚಿಕೆ ಮಾಡಿರುವ ಮೊತ್ತವು ಖರ್ಚಾಗದೆ ಉಳಿದ ಸಂದರ್ಭದಲ್ಲಿ, ಅದನ್ನು ಮುಂದಿನ ಹಣಕಾಸು ವರ್ಷದ ಹಂಚಿಕೆಗೆ ಸೇರಿಸಬಹುದು, ಆದರೆ ಆ ವರ್ಷವೂ ಮೀರಿದ ನಂತರ ಅದನ್ನು ಮುಂದುವರೆಸತಕ್ಕದ್ದಲ್ಲ ಎಂದು ನಿರ್ದೇಶನ ಇರುತ್ತದೆ. ಆದರೆ, ಮೆ॥ ಕೆ.ಆರ್.ಐ.ಡಿ.ಎಲ್ ಸಂಸ್ಥೆಗೆ 2016-17ನೇ ಸಾಲಿನಿಂದ ಇಲ್ಲಿಯವರೆಗೆ ವಹಿಸಲಾಗಿರುವ ಕಾಮಗಾರಿಗಳ ಪೈಕಿ, ಬಹುತೇಕ ಕಾಮಗಾರಿಗಳಿಗೆ ಬದಲಾವಣೆ ಕೋರಿ ಪ್ರಸ್ತಾವನೆಗಳು ಬರುತ್ತಿದ್ದು, ಇದರಿಂದ ಫಲಾನುಭವಿಗಳನ್ನು ಗುರುತಿಸಿ ಆಯಾ ವರ್ಷದಲ್ಲಿ ಕಾಮಗಾರಿಗಳ ಭೌತಿಕ ಪ್ರಗತಿಯನ್ನು ಪರಿಶೀಲಿಸಲು ಕಷ್ಟಸಾಧ್ಯವಾಗುತ್ತಿದೆ.
9. ಮೆ॥ ಕೆ.ಆರ್.ಐ.ಡಿ.ಎಲ್ ಸಂಸ್ಥೆಗೆ ಹಲವಾರು ಇಲಾಖೆಗಳಿಂದ ಕಾಮಗಾರಿಗಳನ್ನು ವಹಿಸಲಾಗುತ್ತಿದ್ದು, ಸದರಿ ಸಂಸ್ಥೆಯಲ್ಲಿನ ಕಾಮಗಾರಿ ಒತ್ತಡದಿಂದ ನಿಗಮದಿಂದ ವಹಿಸಲಾಗುತ್ತಿರುವ ಕಾಮಗಾರಿಗಳ ಭೌತಿಕ ಪ್ರಗತಿಯನ್ನು ಸಾಧಿಸುವಲ್ಲಿ ವಿಳಂಬವಾಗುತ್ತಿದೆ.